

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2177 |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಹೆಚ್.ಎಸ್.ಗೋಪಿನಾಥ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 3) | ಉತ್ತರಿಸಬೇಕಾದ ದಿನಾಂಕ | 18-03-2022 |
| 4) | ಉತ್ತರಿಸುವವರು | ಮಾನ್ಯ ಉನ್ನತ ಶಿಕ್ಷಣ, ಐಟಿ-ಬಿಟಿ ವಿಜ್ಞಾನ ಮತ್ತು ತಂತ್ರಜ್ಞಾನ, ವಿದ್ಯುನ್ಮಾನ ಮತ್ತು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು |

| ಪ್ರಶ್ನೆ | ಉತ್ತರ |
|---|---|
| (ಅ)ರಾಜ್ಯದಲ್ಲಿ ನಿರುದ್ಯೋಗಿ ಪದವೀಧರರಿಗೆ ಯಾವ ಯಾವ ಸೌಲಭ್ಯಗಳನ್ನು ಕಲ್ಪಿಸಲಾಗಿದೆ: | ನಿರುದ್ಯೋಗ ಸಮಸ್ಯೆ ನಿವಾರಿಸಲು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖಾ ವ್ಯಾಪ್ತಿಯಡಿ ಬರುವ ಉದ್ಯೋಗ ವಿಭಾಗದಿಂದ ಈ ಕೆಳಕಂಡ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.<br><br>1) **ನೋಂದಣಿ ಮತ್ತು ವೃತ್ತಿ ಮಾರ್ಗದರ್ಶನ:** ಉದ್ಯೋಗಾಕಾಂಕ್ಷಿಗಳನ್ನು ಉದ್ಯೋಗ ವಿನಿಮಯ ಕೇಂದ್ರಗಳ ಮೂಲಕ ನೋಂದಾಯಿಸಿ ಕೊಳ್ಳಲಾಗುತ್ತಿದ್ದು, ಅವರ ವಿದ್ಯಾರ್ಹತೆಗೆ ತಕ್ಕಂತೆ ಲಭ್ಯವಿರುವ ಶಿಕ್ಷಣ/ತರಬೇತಿ ಸೌಲಭ್ಯ ಹಾಗೂ ಉದ್ಯೋಗಾವಕಾಶಗಳ ಬಗ್ಗೆ **ವೃತ್ತಿ ಮಾರ್ಗದರ್ಶನ** ಹಾಗೂ **ವೃತ್ತಿ ಸಮಾಲೋಚನೆ** ಸೌಲಭ್ಯ ನೀಡಲಾಗುತ್ತಿದೆ.<br><br>2) **ಸ್ಟಡಿ ಸರ್ಕಲ್**: ಸಾರ್ವಜನಿಕ ವಲಯದಲ್ಲಿ ಹೆಚ್ಚಿನ ನೇಮಕಾತಿಗಳು ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನಡೆಯುತ್ತಿರುವುದರಿಂದ ಆದರಲ್ಲೂ ಗ್ರಾಮೀಣ ಅಭ್ಯರ್ಥಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಕೇಂದ್ರ ಲೋಕಸೇವಾ ಆಯೋಗ, ಕರ್ನಾಟಕ ಲೋಕಸೇವಾ ಆಯೋಗ, ಸಿಬ್ಬಂದಿ ನೇಮಕಾತಿ ಆಯೋಗ, ರೈಲ್ವೆ ಇಲಾಖೆ, ರಕ್ಷಣಾ ಪಡೆ ಮತ್ತು ಬ್ಯಾಂಕಿಂಗ್ ಕ್ಷೇತ್ರದಲ್ಲಿ ಎಲ್ಲಾ ವರ್ಗದ (ಗ್ರೂಪ್-ಎ,ಬಿ&ಸಿ) ನೇಮಕಾತಿಗಾಗಿ ನಡೆಸಲಾಗುವ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಉಚಿತ ಪರೀಕ್ಷಾಪೂರ್ವ ತರಬೇತಿಗಳನ್ನು ಜಿಲ್ಲಾ ಉದ್ಯೋಗ ವಿನಿಮಯ ಕಚೇರಿಗಳಲ್ಲಿ **ಸ್ಟಡಿ ಸರ್ಕಲ್** ಕಾರ್ಯಕ್ರಮದ ಅಡಿ ನುರಿತ ಸಂಪನ್ಮೂಲ ವ್ಯಕ್ತಿಗಳ ಉಪನ್ಯಾಸದ ಮೂಲಕ ತರಬೇತಿ ಒದಗಿಸಲಾಗುತ್ತಿದೆ.<br><br>3) **ಉದ್ಯೋಗ ಮೇಳ**:- ಉದ್ಯೋಗಾಕಾಂಕ್ಷಿಗಳು ಮತ್ತು ನಿಯೋಜಕರನ್ನು ಒಂದೇ ವೇದಿಕೆಯಡಿ ತರಲು ನೇರ ಸಂದರ್ಶನ, ಅಧಿಸೂಚಿತ ಹುದ್ದೆಗಳಿಗೆ ಪುರಸ್ಕರಣೆ ಹಾಗೂ ಉದ್ಯೋಗ ಮೇಳಗಳನ್ನು ಪ್ರತಿ ಜಿಲ್ಲಾ ಉದ್ಯೋಗ ವಿನಿಮಯ ಕಚೇರಿಗಳ ಮೂಲಕ ಆಯೋಜಿಸಲಾಗುತ್ತಿದ್ದು, ಉದ್ಯೋಗಾಕಾಂಕ್ಷಿಗಳು ಅವರವರ ಶೈಕ್ಷಣಿಕ ಅರ್ಹತೆ ಅನುಸಾರ ಖಾಸಗಿ ಕ್ಷೇತ್ರದ ಉದ್ಯೋಗದಾತರನ್ನು ಸಂಪರ್ಕಿಸಿ ಉದ್ಯೋಗ ಪಡೆದುಕೊಳ್ಳುವ ಅವಕಾಶ ಕಲ್ಪಿಸಲಾಗುತ್ತಿದೆ. ಇದರಿಂದ ಉದ್ಯೋಗಾವಕಾಶಗಳ ಲಭ್ಯತೆ ಮತ್ತು ಅಗತ್ಯ ಮಾನವ ಸಂಪನ್ಮೂಲಗಳ ನೇಮಕಕ್ಕೆ ಅವಕಾಶ ಕಲ್ಪಿಸಲಾಗುತ್ತಿದೆ. |

| | |
|---|---|
| (ಆ) ನಿರುದ್ಯೋಗಿ ಪದವೀಧರರು ಯಾವುದಾದರೂ ಉದ್ಯೋಗದಲ್ಲಿ ನಿರತರಾಗುವವರೆಗೆ ಅವರುಗಳಿಗೆ ನಿರುದ್ಯೋಗ ಭತ್ಯೆಯನ್ನು ನೀಡಲು ಸರ್ಕಾರ ಕ್ರಮ ಕೈಗೊಂಡಿದೆಯೇ: (ಕೈಗೊಂಡಿದ್ದಲ್ಲಿ, ಮಾಹಿತಿ ಒದಗಿಸುವುದು) | ನಿರುದ್ಯೋಗಿ ಪದವೀಧರರಿಗೆ ನಿರುದ್ಯೋಗ ಭತ್ಯೆಯನ್ನು ನೀಡಲಾಗುವುದಿಲ್ಲ. |

ಸಂಖ್ಯೆ: ಕೌಉಜೀಇ 11 ಉಜೀಪ್ರ 2022

(ಡಾ॥ ಸಿ.ಎನ್. ಅಶ್ವಥ್‌ನಾರಾಯಣ)
ಉನ್ನತ ಶಿಕ್ಷಣ, ವಿದ್ಯುನ್ಮಾನ, ಐಟಿ-ಬಿಟಿ,
ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ
ಇಲಾಖಾ ಸಚಿವರು.